ವ್ರತರಾಜಮಿಮಂ ಕೃತ್ವಾ ಸಮಾರಾಧ್ಯ ಮಹೇಶ್ವರೀಂ ।
ಸಂಸಾರಬಂಧನಾನ್ಮುಕ್ತಃ ಸಮಾಧಿರ್ಮುಕ್ತಿಭಾಗಭೂತ್ ॥ ೭೭ ॥

ತೃತೀಯಾಯಾಂ ಚ ಪಂಚಮ್ಯಾಂ ಸಪ್ತಮ್ಯಾಮಷ್ಟಮೀತಿಥೌ ।
ನವಮ್ಯಾಂ ವಾ ಚತುರ್ದಶ್ಯಾಂ ಯೋ ದೇವೀಂ ಪೂಜಯೇನ್ನರಃ ॥ ೭೮ ॥

ಆಶ್ವಿನಸ್ಯ ಸಿತೇ ಪಕ್ಷೇ ವ್ರತಂ ಕೃತ್ವಾ ವಿಧಾನತಃ ।
ತಸ್ಯ ಸರ್ವಂ ಮನೋಭೀಷ್ಟಂ ಪೂರಯತ್ಯನಿಶಂ ಶಿವಾ ॥ ೭೯ ॥

ಯಃ ಕಾರ್ತಿಕಸ್ಯ ಮಾರ್ಗಸ್ಯ ಪೌಷಸ್ಯ ತಪಸಸ್ತಥಾ ।
ತಪಸ್ಯಸ್ಯ ಸಿತೇ ಪಕ್ಷೇ ತೃತೀಯಾಯಾಂ ವ್ರತಂ ಚರೇತ್ ॥ ೮೦ ॥

ಲೋಹಿತೈಃ ಕರವೀರಾದ್ಯೈಃ ಪುಷ್ಪೈರ್ಧೂಪೈಸ್ಸುಗಂಧಿತೈಃ ।
ಪೂಜಯೇನ್ಮಂಗಲಾಂ ದೇವೀಂ ಸ ಸರ್ವಂ ಮಂಗಲಂ ಲಭೇತ್ ॥ ೮೧ ॥

ಸೌಭಾಗ್ಯಾಯ ಸದಾ ಸ್ತ್ರೀಭಿಃ ಕಾರ್ಯಮೇತನ್ಮಹಾವ್ರತಂ ।
ವಿದ್ಯಾಧನಸುತಾಪ್ತ್ಯರ್ಥಂ ವಿಧೇಯಂ ಪುರುಷೈರಪಿ ॥ ೮೨ ॥

---

೭೭ ಈ ಶ್ರೇಷ್ಠವಾದ ವ್ರತವನ್ನು ಆಚರಿಸಿ ಮಹೇಶ್ವರಿಯನ್ನು ಪೂಜಿಸಿ, ಸಮಾಧಿ ಎಂಬ ವೈಶ್ಯನು ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಮುಕ್ತಿಯನ್ನು ಪಡೆದನು

೭೮-೭೯ ತದಿಗೆ, ಪಂಚಮೀ, ಸಪ್ತಮೀ, ಅಷ್ಟಮೀ, ನವಮೀ, ಚತುರ್ದಶೀ ಈ ತಿಥಿಗಳಲ್ಲಿಯೂ ಆಶ್ವಯುಜ ಶುದ್ಧದಲ್ಲಿಯೂ ಯಾರು ಈ ದೇವಿಯ ವ್ರತವನ್ನು ಮಾಡುವರೋ ಅವರ ಮನಸ್ಸಿನ ಇಷ್ಟಾರ್ಥಗಳನ್ನೆಲ್ಲಾ ಉಮೆಯು ನೆರವೇರಿಸುವಳು

೮೦-೮೧ ಕಾರ್ತಿಕ, ಮಾರ್ಗಶಿರ, ಪುಷ್ಯ, ವೈಶಾಖ ಈ ಮಾಸಗಳ ಕೃಷ್ಣ ಪಕ್ಷ ತದಿಗೆಯ ದಿವಸಗಳಲ್ಲಿ ಈ ವ್ರತವನ್ನು ಮಾಡಿ ಕೆಂಪಾದ ಕಣಿಗಲೆಹೂಗಳಿಂದಲೂ, ಕರವೀರಪುಷ್ಪಗಳಿಂದಲೂ, ಪುಷ್ಪ, ಧೂಪ, ದೀಪಗಳಿಂದಲೂ ಮಂಗಳಕರಳಾದ ದೇವಿಯನ್ನು ಪೂಜಿಸುವವರು ಎಲ್ಲ ವಿಧವಾದ ಮಂಗಳವನ್ನೂ ಹೊಂದುವರು

೮೨ ಸ್ತ್ರೀಯರು ತಮ್ಮ ಸೌಭಾಗ್ಯಕ್ಕೋಸ್ಕರವಾಗಿಯೂ, ಪುರುಷರು ವಿದ್ಯಾ, ಧನ, ಮಕ್ಕಳು ಇವುಗಳನ್ನು ಪಡೆಯುವುಕ್ಕಾಗಿಯೂ ಈ ವ್ರತವನ್ನು ಮಾಡಬೇಕು

ಉಮಾಮಹೇಶ್ವರಾದೀನಿ ವ್ರತಾನ್ಯನ್ಯಾನಿ ಯಾನ್ಯಪಿ ।
ದೇವೀಪ್ರಿಯಾಣಿ ಕಾರ್ಯಾಣಿ ಸ್ವಭಕ್ತ್ಯೈವಂ ಮುಮುಕ್ಷುಭಿಃ ॥ ೮೩ ॥

ಸಂಹಿತೇಯಂ ಮಹಾಪುಣ್ಯಾ ಶಿವಭಕ್ತಿವಿವರ್ಧಿನೀ ।
ನಾನಾಖ್ಯಾನಸಮಾಯುಕ್ತಾ ಭುಕ್ತಿಮುಕ್ತಿಪ್ರದಾ ಶಿವಾ ॥ ೮೪ ॥

ಯ ಏನಾಂ ಶೃಣುಯಾದ್ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ।
ಪಠೇದ್ವಾ ಪಾಠಯೇದ್ವಾಪಿ ಸ ಯಾತಿ ಪರಮಾಂ ಗತಿಂ ॥ ೮೫ ॥

ಯಸ್ಯ ಗೇಹೇ ಸ್ಥಿತಾ ಚೇಯಂ ಲಿಖಿತಾ ಲಲಿತಾಕ್ಷರೈಃ ।
ಸಂಪೂಜಿತಾ ಚ ವಿಧಿವತ್ಸರ್ವಾನ್ಕಾಮಾನ್ಸ ಆಪ್ನುಯಾತ್ ॥ ೮೬ ॥

ಭೂತಪ್ರೇತಪಿಶಾಚಾದಿದುಷ್ಟೇಭ್ಯೋ ನ ಭಯಂ ಕ್ವಚಿತ್ ।
ಪುತ್ರಪೌತ್ರಾದಿಸಂಪತ್ತಿರ್ಲಭತ್ಯೇವ ನ ಸಂಶಯಃ ॥ ೮೭ ॥

೮೩ ಉಮಾಮಹೇಶ್ವರ ವ್ರತವನ್ನಾಗಲೀ, ಮತ್ತಾವ ವ್ರತವನ್ನಾಗಲೀ ದೇವಿಯ ಪ್ರೀತ್ಯರ್ಥವಾಗಿ ಭಕ್ತಿಯಿಂದ ಮಾಡಬೇಕು ಅದರಿಂದ ಮೋಕ್ಷವುಂಟಾಗುವುದು

೮೪-೮೫ ಈ ಉಮಾಸಂಹಿತೆಯು ಮಹಾ ಪುಣ್ಯಪ್ರದವಾದುದು ಶಿವನಲ್ಲಿ ಭಕ್ತಿಯನ್ನು ಹೆಚ್ಚಿಸುವುದು ನಾನಾವಿಧವಾದ ಚರಿತ್ರೆಗಳಿಂದ ಕೂಡಿ ಬಹು ರಮ್ಯವಾಗಿರುವುದು ಈ ಸಂಹಿತೆಯನ್ನು ಯಾರು ಭಕ್ತಿಯಿಂದ ಕೇಳುವರೋ, ಹೇಳುವರೋ, ಪಾರಾಯಣಮಾಡುವರೋ ಅಥವಾ ಪಾರಾಯಣಮಾಡಿಸುವರೋ ಅವರು ಸಕಲಸಂಪತ್ತನ್ನು ಅನುಭವಿಸಿ ಕೊನೆಗೆ ಉತ್ತಮವಾದ ಗತಿಯನ್ನು ಹೊಂದುವರು

೮೬-೮೭ ಯಾರ ಮನೆಯಲ್ಲಿ ಸರಳವಾದ ಅಕ್ಷರಗಳಿಂದ ಬರೆದ ಈ ಪುಸ್ತಕವು ಇರುವುದೋ ಮತ್ತು ವಿಧಿವತ್ತಾಗಿ ಅದನ್ನು ಯಾರು ಪೂಜಿಸುವರೋ ಅವರು ತಮ್ಮ ಇಷ್ಟಾರ್ಥಗಳನ್ನೆಲ್ಲಾ ಪಡೆಯುವರು ಅವರಿಗೆ ಭೂತ, ಪ್ರೇತ, ಪಿಶಾಚಾದಿ ದುಷ್ಟ ಗ್ರಹಗಳಿಂದ ಯಾವಾಗಲೂ ಭಯವಿರುವುದಿಲ್ಲ ಅವರ ಮನೆಯಲ್ಲಿ ಪುತ್ರಪೌತ್ರಾದಿ ಸಂಪತ್ತುಗಳು ಸಮೃದ್ಧಿಯಾಗುವುವು ಈ ವಿಷಯದಲ್ಲಿ ಸಂಶಯವಿಲ್ಲ

**ತಸ್ಮಾದಿಯಂ ಮಹಾಪುಣ್ಯಾ ರಮ್ಯೋಮಾಸಂಹಿತಾ ಸದಾ ।**
**ಶ್ರೋತವ್ಯಾ ಪಠಿತವ್ಯಾ ಚ ಶಿವಭಕ್ತಿಮಭೀಪ್ಸುಭಿಃ ॥ ೮೮ ॥**

**ಇತಿ ಶ್ರೀ ಶಿವಮಹಾಪುರಾಣೇ ಪಂಚಮ್ಯಾಮುಮಾಸಂಹಿತಾಯಾಂ ಕ್ರಿಯಾಯೋಗನಿರೂಪವರ್ಣನಂ ನಾಮೈಕಪಂಚಾಶತ್ತಮೋಽಧ್ಯಾಯಃ**

## ಉಮಾಸಂಹಿತಾ ಸಮಾಪ್ತಾ



೮೮ ಆದುದರಿಂದ ಶಿವಭಕ್ತಿಯನ್ನಪೇಕ್ಷಿಸುವವರು ಈ ಮಹಾಪುಣ್ಯದಾಯಕವೂ, ರಮ್ಯವೂ, ಆದ ಉಮಾಸಂಹಿತೆಯನ್ನು ಯಾವಾಗಲೂ ಕೇಳುತ್ತಿರಬೇಕು ಮತ್ತು ಓದುತ್ತಿರಬೇಕು

ಇಲ್ಲಿಗೆ ಶ್ರೀ ಶಿವಪುರಾಣದ ಉಮಾಸಂಹಿತೆಯಲ್ಲಿ ಕ್ರಿಯಾಯೋಗನಿರೂಪವರ್ಣನವೆಂಬ ಐವತ್ತೊಂದನೆಯ ಅಧ್ಯಾಯವು ಮುಗಿದುದು.

## ಉಮಾಸಂಹಿತೆಯು ಮುಗಿದುದು

**॥ ಮಂಗಳಂ ॥**



